9 ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ ಪ್ರಾದೇಶಿಕ ವಿಭಾಗ, ಕೋಲಾರ ಇವರು ಕಾಯ್ದಿರಿಸಿಕೊಂಡಿರುತ್ತಾರೆ.

10 ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ ಪ್ರಾದೇಶಿಕ ವಿಭಾಗ, ಕೋಲಾರ ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ರೂ. 200–00 ಮೌಲ್ಯದ ಛಾಪಾ ಕಾಗದದಲ್ಲಿ ಸಹಿ ಮಾಡಿ ಸಲ್ಲಿಸತಕ್ಕದ್ದು ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೋಲಾರ ಪ್ರಾದೇಶಿಕ ವಿಭಾಗ, ಕೋಲಾರ ಇವರು ಹೊಂದಿರುತ್ತಾರೆ.

11 ಈ ಮೇಲಿನ ಕಾಮಗಾರಿ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾಯೋಜನೆ ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ವಿಳಂಬಿತ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.

12 ಎಲ್ಲಾ ಕೆಲಸಗಳು ಸಕಾಲಕ್ಕೆ ಸರಿಯಾಗಿ ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಕ್ಷೇತ್ರ ಅಳತೆ ಪುಸ್ತಕದೊಂದಿಗೆ (ಎಂಬಿ / ಎಫ್‌ಎನ್‌ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಮಾರಾಟ ತೆರಿಗೆ, ಸರ್‌ಚಾರ್ಜ್ ಮತ್ತು ಭದ್ರತಾ ಠೇವಣಿಯನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.

13 ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳಿಗೆ ಹಾನಿ ಉಂಟು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನು ರೀತ್ಯ ಕ್ರಮ ಜರುಗಿಸಲಾಗುವುದು.

14 ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.

15 ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರನ್ನು ಕಪ್ಪುಪಟ್ಟಿಗೆ ಸೇರಿಸಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ / ಅವಕಾಶವಿರುವುದಿಲ್ಲ. ನ್ಯಾಯಾಲಯಗಳಲ್ಲಿ ಅಪರಾಧಿಗಳೆಂದು ನಿರ್ಧರಿಸಲ್ಪಟ್ಟಂತಹ ಯಾವುದೇ ವ್ಯಕ್ತಿಗಳು ಈ ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ.

16 ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ನಷ್ಟ / ಹಾನಿ ಇತ್ಯಾದಿಗಳಿಗೆ ಜವಾಬ್ದಾರರಲ್ಲ.

17 ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜುಪಟ್ಟಿಗಳ ಅಂದಾಜು ಸಂಭವನೀಯ ದರವಾಗಿರುತ್ತದೆ ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಾಗೂ ಕ್ಷೇತ್ರ ಅಳತೆಯನುಸಾರವಾಗಿ ಹಣ ಪಾವತಿಸಲಾಗುವುದು.

18 ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಸಂರಕ್ಷಣಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ / ಮೌಖಿಕ ಆದೇಶಗಳಿಗನುಗುಣವಾಗಿ ಇರತಕ್ಕದ್ದು ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ದರಾಗಿರುತ್ತಾರೆ.

19 ಕಾಮಗಾರಿಯನ್ನು ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ನಿರ್ದೇಶನದಂತೆ ಪೂರ್ಣಗೊಳಿಸತಕ್ಕದ್ದು ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗಧಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಅತಿ ವಿಶೇಷ ಸಂದರ್ಭಗಳಲ್ಲಿ ಮಾತ್ರ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಮಂಜೂರಾದ ದರಗಳಲ್ಲಿ ಶೇ.5ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯಾಧಿಕಾರಿಗಳು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ. ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

20 ಟೆಂಡರ್‌ನ್ನು ಕಂಪನಿಯ ವತಿಯಿಂದ / ಸಂಘ ಸಂಸ್ಥೆಗಳು ಕೊಡುವ ಸಂದರ್ಭದಲ್ಲಿ

ಅ) ಕಂಪನಿಯು / ಸಂಘ ಸಂಸ್ಥೆಗಳ ನೊಂದಾಯಿತ ಸಂಸ್ಥೆಗಳಾಗಿರಬೇಕು.

ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡಿರಬೇಕು. ಇಂತಹ ಪತ್ರವನ್ನು ಟೆಂಡರ್‌ನೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

21 ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ. ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು. ಹಾಗೂ ಸಂಘಗಳ ನೊಂದಾವಣೆ ನಿಯಮದಂತೆ ಸಂಘಗಳು ಕಡ್ಡಾಯವಾಗಿ ನೊಂದಾವಣೆಯಾಗಿರಬೇಕು ಇಲ್ಲವಾದಲ್ಲಿ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

22 ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರ್‌ನ್ನು ಹಿಂತೆಗೆದುಕೊಂಡಲ್ಲಿ ಅಥವಾ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ ಅಥವಾ ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಅಂತಹ ಟೆಂಡರ್‌ದಾರರ ಇಎಂಡಿ. ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ವೆಚ್ಚ ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963ರ ಕಲಂ 109 ಮತ್ತು 119ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.

23 ಯಶಸ್ವಿಯಾದ ಬಿಡ್‌ದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇ.5ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ನೆಡುತೋಪು ನಿರ್ಮಾಣದ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ದೃಢೀಕರಣ ಪತ್ರ ಮತ್ತು ಕಾಮಗಾರಿಯ ಮುಕ್ತಾಯ ವರದಿ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.

24 ಕೆಲಸ ಪೂರ್ಣಗೊಂಡ ದಿನಾಂಕದಿಂದ 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ಲೋಪ / ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ಲೋಪ / ದೋಷ ಪರಿಹರಿಸಬೇಕಾಗುವುದು. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ವೆಚ್ಚವನ್ನು ಭರಿಸಲಾಗುವುದು.

25 ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ / ಇನ್ನಿತರೆ ಹಾನಿಗಳು ಸಂಭವಿಸಿದಲ್ಲಿ ಅದಕ್ಕೆ ಗುತ್ತಿಗೆದಾರರೆ ಜವಾಬ್ದಾರರಾಗಿದ್ದು ನಷ್ಟ ಪರಿಹಾರವನ್ನು ವೈಯಕ್ತಿಕವಾಗಿ ಗುತ್ತಿಗೆದಾರರೇ ನೀಡಬೇಕಾಗುತ್ತದೆ.

26 ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.

27 ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.

28 ಸರ್ಕಾರದಿಂದ ಆಗಿಂದಾಗ್ಗೆ ಬರುವ ಆದೇಶಗಳನ್ವಯ ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೋಲಾರ ಪ್ರಾದೇಶಿಕ ಅರಣ್ಯ ವಿಭಾಗರವರು ವಿಧಿಸುವ ಷರತ್ತುಗಳ ಬದಲಾವಣೆಗಳಿಗೆ ಗುತ್ತಿಗೆದಾರರು ಬದ್ಧರಾಗಿರಬೇಕು.

29 ಟೆಂಡರ್ ಫಾರಂಗಳನ್ನು ಬೇರೆಯವರ ಹೆಸರಿಗೆ ಪರಭಾರೆ ಮಾಡುವಂತಿಲ್ಲ ಈ ಕಛೇರಿಯಿಂದ ನೀಡಲಾದ ಅಧಿಕೃತ ಟೆಂಡರ್ ಫಾರಂಗಳನ್ನು ಹೊರೆತು ಬೇರಾವ ಮುದ್ರಿತ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.

30 ನಮೂದಿಸಿರುವ ಕಾಮಗಾರಿಗಳಿಗೆ ಸಂಬಂಧಿಸಿದ ಕೆಲಸದ ಸ್ಥಳ, ಪರಿಮಾಣ ಹಾಗೂ ಅಂದಾಜು ಮೊತ್ತಗಳು ಬದಲಾವಣೆಗಳಿಗೆ ಒಳಪಟ್ಟಿರುತ್ತವೆ. ಇದಕ್ಕೆ ಕಾಮಗಾರಿಗಳ ತತ್ಸಂಬಂಧಿತ ವ್ಯತ್ಯಾಸದ ಪರಿಮಾಣಕ್ಕೆ ಪ್ರತ್ಯೇಕ ಟೆಂಡರು ಕರೆಯಲಾಗುವುದಿಲ್ಲ. ಆದರೆ ಅದೇ ದರದಲ್ಲಿ ವ್ಯತ್ಯಾಸಿತ ಪರಿಮಾಣದ ಕೆಲಸಗಳನ್ನು ಕೈಗೊಳ್ಳಲು ಬದ್ದರಾಗಬೇಕಾಗುತ್ತದೆ.

31 ಸಕ್ಷಮ ಪ್ರಾಧಿಕಾರದ ನಿರ್ಧಾರದ ಮೇರೆಗೆ ಯಾವುದೇ ಕಾಮಗಾರಿ ತೆಗೆದು ಹಾಕುವ ಹೊಸದಾಗಿ ಸೇರ್ಪಡೆ ಮಾಡುವ ಅಧಿಕಾರವು ಉಪ ಅರಣ್ಯ ಸಂರಕ್ಷಣಾಧಿಕಾರಿ ರವರ ಅಧಿಕಾರಕ್ಕೆ ಒಳಪಟ್ಟಿರುತ್ತದೆ.

32 ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತವು ನೆಡುತೋಪು ಕಾವಲು ಕೆಲಸದ ಮೊತ್ತವನ್ನು ಒಳಗೊಂಡಿದ್ದು ಕಾಮಗಾರಿ ನಿರ್ವಹಣೆ ಬಾಬ್ತು ಪಾವತಿಯಲ್ಲಿ ಕಾವಲು ಮೊತ್ತವನ್ನು ಕಳೆದು ಪಾವತಿಸಲಾಗುವುದು.

ಪಿ.ಆರ್. 362 ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೋಲಾರ ವಿಭಾಗ, ಕೋಲಾರ.

**ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ**

**ಸಂಕ್ಷಿಪ್ತ ಹರಾಜು ಇಸ್ತಿಹಾರ್ ಪ್ರಕಟಣೆ.**

**ಸಂಖ್ಯೆ..ಎ3/ಕಾವಜಿ/ಹರಾಜು/ವಾ.ನಿ/ಸಿಆರ್–1/2009–10, ದಿನಾಂಕ: 23ನೇ ಮೇ 2009**

**ವಿಷಯ:** ಕಾವೇರಿ ವನ್ಯಧಾಮದ ವ್ಯಾಪ್ತಿಯ ಮಲ್ಯೆ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ ಪ್ರವೇಶಿಸುವ ವಾಹನಗಳಿಂದ ವಾಹನ ನಿಲುಗಡೆ ಶುಲ್ಕ ವಸೂಲಿ ಮಾಡಲು ಹರಾಜು ನಡೆಸುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಕಾವೇರಿ ವನ್ಯ ಜೀವಿ ವಿಭಾಗದ ವ್ಯಾಪ್ತಿಗೆ ಬರುವ ಈ ಕೆಳಕಂಡ ಪ್ರವಾಸಿಗರ ಪ್ರೇಕ್ಷಣೀಯ ಸ್ಥಳಗಳಿಗೆ ಬರುವ ವಾಹನಗಳಿಂದ ವಾಹನ ನಿಲುಗಡೆ ಶುಲ್ಕ ವಸೂಲು ಮಾಡಲು ಈ ಮೂಲಕ ಹರಾಜನ್ನು ಕರೆಯಲಾಗಿದೆ, ಈ ವನ್ಯಧಾಮಕ್ಕೆ ಸದರಿ ಸಾಲಿಗೆ ಸರ್ಕಾರಿ ಆದೇಶ ಸಂಖ್ಯೆ FEE.258.FWL.98 (part) ದಿನಾಂಕ 3–01–2001 ರ ಪ್ರಕಾರ ಪ್ರತಿದಿನವೊಂದಕ್ಕೆ ವಾಹನವೊಂದಕ್ಕೆ ವಾಹನ ನಿಲುಗಡೆ ಶುಲ್ಕ ಜೀಪು ಅಥವಾ ಕಾರುಗಳಿಗೆ ರೂ 30/– ಹಾಗೂ ಇತರೆ ಲಘು ವಾಹನಗಳಿಗೆ ರೂ 40/– ಮತ್ತು ಬಸ್ಸು ಮತ್ತು ಟ್ರಕ್‌ಗಳಿಗೆ ರೂ.50/– ವಸೂಲಾತಿ ಮಾಡಬೇಕಾಗಿರುವುದರಿಂದ, ಕೆಳಕಂಡ ಅರಣ್ಯ ವನ್ಯಧಾಮದ ಪ್ರದೇಶಗಳಲ್ಲಿ ವಾಹನ ನಿಲುಗಡೆ ಶುಲ್ಕ ದಿನಾಂಕ 01–06–2009 ರಿಂದ 31–03–2010 ರವರೆಗೆ ವಸೂಲು ಮಾಡಲು ಉದ್ದೇಶಿಸಿರುವ ಸ್ಥಳಗಳನ್ನು ಈ ಮುಂದೆ ನಮೂದಿಸಿರುವ ದಿನಾಂಕಗಳಂದು ಬಹಿರಂಗ ಹರಾಜನ್ನು ಕೈಗೊಳ್ಳಲಾಗುತ್ತದೆ, ಸದರಿ ಕೆಲಸ ನಿರ್ವಹಿಸಲು ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಬಹುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳುವಳಿಕೆ ನೀಡಲಾಗಿದೆ.

| ಕ್ರ. ಸಂ | ವಲಯ | ವನ್ಯಧಾಮಕ್ಕೆ ಪ್ರವೇಶಿಸುವ ವಾಹನಗಳಿಂದ ವಾಹನ ನಿಲುಗಡೆ ಶುಲ್ಕ ಸಂಗ್ರಹಿಸಲಾಗುವ ಸ್ಥಳ | ಹರಾಜು ನಡೆಯುವ ಸ್ಥಳ ಮತ್ತು ದಿನಾಂಕ | ಷರಾ |
|---|---|---|---|---|
| 1. | ಮಲ್ಯೆ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ | ಗೋಪಿನಾಥಂ ನಿಂದ ಹೊಗೇನಕಲ್ ಫಾಲ್ಸ್ ವರೆಗೆ ಮಾರಿಕೊಟ್ಟಾಯಿ ವನ್ಯಧಾಮದ ಗಡಿ ಪ್ರದೇಶದವರೆಗೆ. | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ ಮಲ್ಯೆ ಮಹದೇಶ್ವರ ಬೆಟ್ಟ ವನ್ಯಜೀವಿ ವಲಯ. ದಿನಾಂಕ 09.06.2009 ಮಧ್ಯಾಹ್ನ 3:30 ಗಂಟೆಗೆ. | (ಕಾಲಾವಧಿ 15.06.2009 ರಿಂದ 31.03.2010 ರವರೆಗೆ $9^1/_2$ ತಿಂಗಳು ಮಾತ್ರ) |

ನಿಗಧಿಪಡಿಸಿದ ಹರಾಜಿನ ದಿನಾಂಕಗಳಂದು ಹರಾಜಿನಲ್ಲಿ ಯಾರೂ ಭಾಗವಹಿಸದಿದ್ದಲ್ಲಿ ಅಥವಾ ಸಾರ್ವಜನಿಕ ರಜೆ ಎಂದು ಘೋಷಿತವಾದಲ್ಲಿ ಹರಾಜು ನಿಗಧಿಪಡಿಸಿದ ಸ್ಥಳ ಮತ್ತು ವೇಳೆಯಲ್ಲಿಯೇ ಹರಾಜನ್ನು 09–06–2009 ರ ಬದಲಾಗಿ ಮುಂದಿನ ದಿನಾಂಕದಂದು ಮರು ಹರಾಜನ್ನು ನಡೆಸಲಾಗುವುದು.

**ನಿಬಂಧನೆಗಳು:–**

1. ಹರಾಜಿನಲ್ಲಿ ತಿಳಿಸಿರುವ ವಾಹನ ನಿಲುಗಡೆ ಶುಲ್ಕ ಸಂಗ್ರಹಿಸಲಾಗುವ ವಿವಿಧ ಸ್ಥಳಗಳಿಗೆ ಪ್ರತ್ಯೇಕವಾಗಿ ವಾಹನ ನಿಲುಗಡೆ ಶುಲ್ಕ ವಸೂಲಾತಿಗಾಗಿ ಹರಾಜು ನಡೆಸಲಾಗುತ್ತಿದೆ.
2. ಹರಾಜಿನಲ್ಲಿ ಭಾಗವಹಿಸುವವರು ರೂ.5000.00 ಠೇವಣಿ ಪಾವತಿಸಿ, ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.
3. ಯಶಸ್ವಿ ಬಿಡ್ಡುದಾರರು ಅವರವರ ಹೆಸರಿಗೆ ಆಗಿರುವ ವನ್ಯಧಾಮದ ವಾಹನ ನಿಲುಗಡೆ ಶುಲ್ಕ ಸಂಗ್ರಹದ ಬಾಬ್ತಿನ ಪೂರ್ಣ ಹಣವನ್ನು ಆದಿನವೇ ಪಾವತಿಸತಕ್ಕದ್ದು ತಪ್ಪಿದ್ದಲ್ಲಿ ಯಶಸ್ವಿ ಬಿಡ್ಡುದಾರರ ಮುಂಗಡ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜನ್ನು ರದ್ದುಗೊಳಿಸಲಾಗುವುದು.
4. ಯಶಸ್ವಿ ಬಿಡ್ಡುದಾರರು ಈ ಕಚೇರಿಯಿಂದ ಕಾರ್ಯಾದೇಶ ದೊರೆತ ಕೂಡಲೇ ರೂ.200/– ಛಾಪಾಕಾಗದದಲ್ಲಿ ಕೆಳಸಹಿದಾರರೊಡನೆ ಕರಾರು ಒಪ್ಪಂದ ಮಾಡಿಕೊಳ್ಳತಕ್ಕದು.
5. ಯಶಸ್ವಿ ಬಿಡ್ಡುದಾರರು ಅವರು ಕೆಲಸ ನಿರ್ವಹಿಸಲಿರುವ ನಿಗದಿಪಡಿಸಿದ ಸ್ಥಳಗಳಲ್ಲಿ ಸಾರ್ವಜನಿಕರಿಂದ ಸಂಗ್ರಹಿಸಲಿರುವ ದರಗಳು ಹಾಗೂ ನಿಯಮಗಳ ಬಗ್ಗೆ ನಾಮಫಲಕಗಳನ್ನು ಹಾಕಿ ಕೆಲಸ ನಿರ್ವಹಿಸುವುದು.
6. ಯಶಸ್ವಿ ಬಿಡ್ಡುದಾರರು ವನ್ಯಧಾಮದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಿಂದ ಮಾತ್ರ ಸರ್ಕಾರಿ ಆದೇಶದಂತೆ ವಾಹನ ನಿಲುಗಡೆ ಶುಲ್ಕ ಪ್ರವಾಸಿಗರಿಂದ ವಸೂಲಿ ಮಾಡತಕ್ಕದ್ದು ಹಾಗೂ ವನ್ಯಧಾಮದ ಹೊರವಲಯದಿಂದ ವಾಹನ ನಿಲುಗಡೆ ಶುಲ್ಕ ಇತ್ಯಾದಿ ವಸೂಲಾತಿ ಬಗ್ಗೆ ತಂಟೆ ತಕರಾರುಗಳು ಬಂದಲ್ಲಿ ಈ ಕಛೇರಿಯು ಜವಾಬ್ದಾರರಲ್ಲ.
7. ಯಶಸ್ವಿ ಬಿಡ್ಡುದಾರರು ವನ್ಯಧಾಮದ ಹಿತದೃಷ್ಟಿಯಿಂದ ಅಕ್ರಮ ಚಟುವಟಿಕೆಗಳನ್ನು ತಡೆಯಲು ಇಲಾಖೆಯೊಂದಿಗೆ ಸಹಕರಿಸತಕ್ಕದ್ದು.
8. ಯಶಸ್ವಿ ಬಿಡ್ಡುದಾರರು ಅಕ್ರಮ ಚಟುವಟಿಕೆದಾರರೊಡನೆ ಶಾಮೀಲಾಗಿರುವುದು ಕಂಡು ಬಂದಲ್ಲಿ ಗುತ್ತಿಗೆಯನ್ನು ರದ್ದುಗೊಳಿಸುವುದಲ್ಲದೇ ಕಾನೂನಿನಂತೆ ಕ್ರಮ ಜರುಗಿಸಲಾಗುವುದು.
9. ಈ ಹರಾಜಿನಲ್ಲಿ ಯಾವುದೇ ವಿಧವಾದ ತಂಟೆ ತಕರಾರುಗಳು ಬಂದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇವರ ತೀರ್ಪು ಅಂತಿಮವಾಗಿರುತ್ತದೆ, ಇದಕ್ಕೆ ಬಿಡ್ಡುದಾರರು ಬದ್ಧರಾಗಿರಬೇಕು.
10. ವಾಹನಗಳಿಗೆ ವನ್ಯಧಾಮದ ಪ್ರವೇಶ ವೇಳೆಯನ್ನು ಬೆಳಿಗ್ಗೆ 6.00 ರಿಂದ ಸಂಜೆ 6.00 ರವರೆಗೆ ಮಾತ್ರ ನಿಗಧಿಗೊಳಿಸಲಾಗಿದೆ.
11. ವನ್ಯಧಾಮ ಪ್ರವೇಶ ಮಾಡುವ ಲಘು ವಾಹನಗಳಿಂದ (ಜೀಪು, ಕಾರು) ರೂ.30/– ಗಳನ್ನು, ಸ್ವರಾಜ್ ಮಜ್ದ, ಟಿ.ಟಿ ಗಳಿಗೆ ರೂ.40/– ಮತ್ತು ಬಸ್ ಮತ್ತು ಟ್ರಕ್‌ಗಳಿಗೆ ರೂ.50/– ಮಾತ್ರ ವಸೂಲಿ ಮಾಡುವುದು.
12. ವನ್ಯಧಾಮದೊಳಗೆ ಪ್ರವೇಶಿಸುವ ವಾಹನಗಳ ನೊಂದಣಿ ಸಂಖ್ಯೆಯನ್ನು ಒಂದು ವಹಿಯಲ್ಲಿ ಪ್ರತಿ ದಿನ ನಿರ್ವಹಿಸುವುದು.
13. ಸರ್ಕಾರಿ ವಾಹನಗಳಿಗೆ ಪ್ರವೇಶ ಶುಲ್ಕ ವಸೂಲಾತಿಯಿಂದ ವಿನಾಯಿತಿ ನೀಡಲಾಗಿದೆ.
14. ವನ್ಯಧಾಮದೊಳಗೆ ನಿಲುಗಡೆಯಾಗುವ ವಾಹನಗಳಿಗೆ ಯಾವುದೇ ರೀತಿಯ ಅನಾಹುತವಾದಲ್ಲಿ ಅದಕ್ಕೆ ವಾಹನ ಮಾಲೀಕರೇ ಜವಾಬ್ದಾರರಾಗಿರುತ್ತಾರೆಯೇ ಹೊರತು, ಅರಣ್ಯ ಇಲಾಖೆ ಯಾವುದೇ ಜವಾಬ್ದಾರಿಯಾಗುವುದಿಲ್ಲ.
15. ಯಶಸ್ವಿ ಗುತ್ತಿಗೆದಾರರು ನೇಮಿಸಿದ ಕೆಲಸದವರಿಗೆ ವನ್ಯಪ್ರಾಣಿಗಳಿಂದ ಅಪಘಾತಗಳು ಸಂಭವಿಸಿದಲ್ಲಿ ಅರಣ್ಯ ಇಲಾಖೆಯಿಂದ ಯಾವುದೇ ಪರಿಹಾರಕ್ಕೆ ಅರ್ಹರಾಗಿರುವುದಿಲ್ಲ.
16. ಯಾವುದೇ ಕಾರಣವಿಲ್ಲದೆ ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕೆಳಸಹಿದಾರರಲ್ಲಿ ಕಾಯ್ದಿರಿಸಲಾಗಿದೆ.
17. ಯಶಸ್ವಿ ಬಿಡ್ಡುದಾರರು ವನ್ಯಧಾಮದಲ್ಲಿ ಪರಿಸರ ಮಾಲಿನ್ಯ ತಡೆಯಲು ಹೆಚ್ಚಿನ ನಿಗಾ ವಹಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪಿ.ಆರ್. 360 ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ.

## ಲೋಕೋಪಯೋಗಿ ಇಲಾಖೆ

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಟೆಂಡರು ಸಮಯಾವಧಿ ವಿಸ್ತರಣೆ**

**ಸಂಖ್ಯೆ:ಲೋ.ಇ:ಮಂವಿ:ಟಿ.ಎನ್.ಡಿ(1):2009–10:ಎಇ–1, ದಿನಾಂಕ: 20ನೇ ಮೇ 2009**

ದಿನಾಂಕ:7.5.2009ರ "ಉದಯವಾಣಿ' ಮತ್ತು 'ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್' ದಿನಪತ್ರಿಕೆಗಳಲ್ಲಿ ಪ್ರಕಟಣೆ ಸಂಖ್ಯೆ: ಲೋ.ಇ:ಮಂ.ವಿ:ಟಿ.ಎನ್.ಡಿ(1):2009–10:ಎಇ1 ದಿನಾಂಕ:4.5.2009ರ ಪ್ರಕಟಣೆಯಲ್ಲಿ ಸೂಚಿಸಿದ ಈ ಕೆಳಗಿನ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಆಹ್ವಾನಿಸಲಾದ ಟೆಂಡರ್ ಪ್ರಕಟಣೆಗೆ ಸಮಯಾವಧಿ ವಿಸ್ತರಣೆಯನ್ನು ಈ ಕೆಳಗಿನಂತೆ ಮಾಡಲಾಗಿದೆ.

| ಕ್ರ. ಸಂ. | ಕಾಮಗಾರಿ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| **I** | **5054 ಇತರ ರಸ್ತೆ ರಚನೆ** | |
| 1. | ಮಂಗಳೂರು ತಾಲ್ಲೂಕು ಎಕ್ಕಾರು – ನೀರುಡೆ – ಮುಚ್ಚೂರು ರಸ್ತೆಯ ಕಿ.ಮೀ. 0.00 ರಿಂದ 2.00ರ ವರೆಗೆ ಆಯ್ದಭಾಗಗಳಿಗೆ ಅಭಿವೃದ್ಧಿ | 30.00 |
| 2. | ಮಂಗಳೂರು ತಾಲ್ಲೂಕು ಮರವೂರು – ಜೋಕಟ್ಟೆ – ಪಣಂಬೂರು ರಸ್ತೆಯ ಕಿ.ಮೀ. 3.00 ರಿಂದ 5.00ರ ವರೆಗೆ ಆಯ್ದಭಾಗಗಳಿಗೆ ಕಾಂಕ್ರೀಟ್ ಚರಂಡಿ ನಿರ್ಮಾಣ ಹಾಗೂ ಮರು ಡಾಂಬರೀಕರಣ | 20.00 |
| 3. | ಮಂಗಳೂರು ತಾಲ್ಲೂಕು ಹಳೆಯಂಗಡಿ – ಪಕ್ಷಿಕೆರೆ ರಸ್ತೆಯ ಕಿ.ಮೀ. 0.00 ರಿಂದ 1.00ರ ವರೆಗೆ ಆಯ್ದಭಾಗಗಳಲ್ಲಿ ಅಭಿವೃದ್ಧಿ | 20.00 |
| 4. | ಬಂಟ್ವಾಳ ತಾಲ್ಲೂಕು ಕೋಟೆಕಾರು – ಪಾತೂರು ರಸ್ತೆಯ ಕಿ.ಮೀ. 18.90ರಲ್ಲಿ ಮದಂಗಾರು ಕಟ್ಟೆ ಎಂಬಲ್ಲಿ ದುರ್ಬಲ ಸೇತುವೆ ಪುನರ್ ನಿರ್ಮಾಣ | 30.00 |
| 5. | ಬಂಟ್ವಾಳ ತಾಲ್ಲೂಕು ಕೋಟೆಕಾರು – ಪಾತೂರು ರಸ್ತೆಯ ಮುಡಿಪು ಪೇಟೆ ಭಾಗದಲ್ಲಿ ರಸ್ತೆಗೆ ವಿಭಾಜಕ ಒದಗಿಸಿ ರಸ್ತೆ ಅಭಿವೃದ್ಧಿಪಡಿಸುವುದು (5.50 ಮೀಟರ್‌ಗೆ ಅಗಲಗೊಳಿಸಿ ಡಾಂಬರೀಕರಣ) | 30.00 |
| | **3054 ರಸ್ತೆ ಮತ್ತು ಸೇತುವೆ (ಯೋಜನೆ)** | |
| 1 | ಬಂಟ್ವಾಳ ತಾಲ್ಲೂಕು ಪಾಣೆ ಮಂಗಳೂರು ಪೇಟೆ ರಸ್ತೆ ಕಿಮೀ 0.00 ರಿಂದ 0.80ರ ವರೆಗೆ ಮೇಲ್ಮೈ ಬಲಪಡಿಸಿ ಡಾಂಬರೀಕರಣ ಮತ್ತು ಅಭಿವೃದ್ಧಿ | 50.00 |
| **II** | **5054 ರಸ್ತೆ ಮತ್ತು ಸೇತುವೆಗಳು** | |
| 1 | ಸುಳ್ಯ ತಾಲ್ಲೂಕಿನ ಅಯ್ಯನಕಟ್ಟೆ ಚೊಕ್ಕಾಡಿ ಬೆಂಗಮಲೆ ರಸ್ತೆ ಕಿ.ಮೀ 2.75 ರಿಂದ 5.50ರ ವರೆಗೆ ಮರು ಡಾಂಬರೀಕರಣ | 40.00 |
| **III** | **4202 ಕಾಲೇಜು ಶಿಕ್ಷಣ ನಬಾರ್ಡ್ ಆರ್.ಐ.ಡಿ.ಎಫ್–13 ಯೋಜನೆ** | |
| 1 | ದ.ಕ. ಜಿಲ್ಲೆ ಮಂಗಳೂರು ತಾಲ್ಲೂಕಿನ ಹಳೆಯಂಗಡಿ ಸರಕಾರಿ ಪ್ರಥಮ ದರ್ಜೆ ಕಾಲೇಜು ತರಗತಿ ಕೊಠಡಿ ನಿರ್ಮಾಣ | 25.00 |
| 2 | ದ.ಕ. ಜಿಲ್ಲೆ ಸುಳ್ಯ ತಾಲ್ಲೂಕಿನ ಬೆಳ್ಳಾರೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ತರಗತಿ ಕೊಠಡಿ ನಿರ್ಮಾಣ | 25.00 |

1. ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ಸ್ವೀಕರಿಸುವ ದಿನಾಂಕ: 10.6.2009.
2. ಖಾಲಿ ಟೆಂಡರು ಫಾರಂಗಳನ್ನು ನೀಡುವ ದಿನಾಂಕ: 10.6.2009
3. ಭರ್ತಿ ಮಾಡಿದ ಟೆಂಡರು ಸ್ವೀಕರಿಸುವ ಅಂತಿಮ ದಿನಾಂಕ: 11.6.2009ರ ಸಂಜೆ 4.00 ಗಂಟೆಯ ವರೆಗೆ.

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ http//www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಪಿ.ಆರ್. 358 ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

## ಪೊಲೀಸ್ ಇಲಾಖೆ

**ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು–560 001**

**ಟೆಂಡರ್ ಪ್ರಕಟಣೆ ಸಂಖ್ಯೆ: ಸಂಗ್ರಹ–2(4)53/2007–08, ದಿನಾಂಕ: 18ನೇ ಮೇ 2009**

ಪೊಲೀಸ್ ಇಲಾಖೆಯ ಪೊಲೀಸ್ ಮುದ್ರಣಾಲಯಕ್ಕೆ ಒಂದು ಸಂಖ್ಯೆ Autoprint Knight Mini Offset Printer with all standard accessories & Electrical equipments ಗಳನ್ನು ಸರಬರಾಜು ಮಾಡಿ ಅಳವಡಿಸಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

**ಸೂಚನೆ:** ಮೇಲಿನ ಉಪಕರಣದ ಉತ್ಪಾದಕರು / ಉತ್ಪಾದಕ ಘಟಕದ ಅಧಿಕೃತ ಏಜೆಂಟುದಾರರು ಹಾಗೂ ಮಾರುಕಟ್ಟೆಯಲ್ಲಿ ಲಭ್ಯವಿರುವ ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ಸಾಮಗ್ರಿಯ ನಿರ್ದಿಷ್ಟತೆ/ವಿಶಿಷ್ಟತೆಯ ಮೂಲಕ (Specification) ದಿನಾಂಕ: 27.05.2009 ರಿಂದ 26.06.2009ರ ವರೆಗೆ ಕೆಲಸಗಳ ದಿನಗಳಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.1,000/– ಆಗಿದ್ದು, ಇದನ್ನು ಮರುಪಾವತಿ ಮಾಡಲಾಗುವುದಿಲ್ಲ. ಈ ಅರ್ಜಿಯ ಬೆಲೆಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು). ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.1,100/– ಗಳಿಗೆ ಡಿ.ಡಿಯನ್ನು (ಅರ್ಜಿ ಶುಲ್ಕ ರೂ.1,000/– + ಅಂಚೆ ವೆಚ್ಚ ರೂ.100/–) ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರುಗಳಲ್ಲಿ "ಸರಬರಾಜು ಮಾಡುವ ಸಾಮಗ್ರಿಗಳಿಗೆ ದರಪಟ್ಟಿ" ಎಂದು ಮೇಲ್ಭಾಗದಲ್ಲಿ ಬರೆದು, ಅರ್ಜಿದಾರರ ವಿಳಾಸವನ್ನು ಕೆಳಗಡೆ ನಮೂದಿಸುವುದು.

ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2ರಷ್ಟು ಇ.ಎಂ.ಡಿ.ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. ಮೂಲಕ ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟ್ಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್, ಆರ್ಥಿಕ ಸ್ಥಿತಿ, ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ, ವಾರ್ಷಿಕ ವಹಿವಾಟು ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಕಛೇರಿಯ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ–1) ರವರಾದ ಶ್ರೀ ಬಿ. ಚಂದ್ರಶೇಖರ್, ಐ.ಪಿ.ಎಸ್. ರವರಿಗೆ ಹೆಸರಿಸಿ, ದಿನಾಂಕ: 26.06.2009ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.

ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 27.06.2009 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಪ್ರತಿ ಉಪಕರಣಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ.ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ / ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ / ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ / ಭಾಗಶಃ ಒಪ್ಪಿಕೊಳ್ಳುವ, ಹೆಚ್ಚು ಮತ್ತು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಪರವಾಗಿ

**POLICE DEPARTMENT**

**Office of the Director General and Inspector General of Police,**

**No.2, Nrupathunga Road, Bangalore,**

**TENDER NOTICE**

**No.STS-II(4)53/2007-08, Dated: 18th May 2009**

Sealed teners are invited for supply & installation of **One No. Autoprint Knight Mini Offset Printer with all standard accessories & Electrical equipments** to Police Printing Press of Police Department.

**NOTE:** Preference will be given to manufacturing unit/reputed agent and reputed brands available in the market.

Tender forms containing detailed terms and conditions and **specification of item** can be obtained from this office between 10.00 am to 4.00 pm. on any working day from 27.05.2009 to 26.06.2009. The cost of each tender form is 1,000/- (Rupees One Thousand only) payable in the form of Cash or DD which is non refundable (money order will not be accepted). The Tenderer who desires to obtain tender form by post may send DD for Rs.1,100/- (Rs.1,000/- towards application fee and Rs.100/- towards postage charges) drawn in favour of Director General and Inspector General of Police, Karnataka State, Bangalore. Tender should be submitted induplicate in two sealed envelopes duly superscribed on the top as **"Quotation for the Supply of Items"** with the address of the firm on the cover.

The envelope should contain duly filled tender application along with D.D. drawn in favour of Director General and Inspector General of Police, Karnataka State, Bangalore towards E.M.D. (The E.M.D. should be equivalent to 2% of value of each goods, rate quoted by the tenderers) Financial Status, Technical and Service capability, Sale tax, Income tax details, Annual turnover details, Brochures,

Catalogues with technical specification. This envelope should be addressed to Sri C. Chandrashekar IPS, Inspector General of Police, Headquarters-I, and submit before 5.00 pm on or before 26.06.2009. Tender applications received after due date will not be considered. The received tenders in envelope will be opened in this office at 11.00 AM on 27.06.2009. Interested persons can participate in the proceedings of opening tenders.

The tenders received without separate Earnest Money Deposit (E.M.D.) for each item in the form of Demand Draft shall run the risk of rejection. The Department will not be responsible for any delay, loss, damage or non receipt of request/ tender documents/ tender sent by posts/ courier etc., Department's right to accept/ reject/ split any or all tenders without assigning any reasons is reserved.

P.R. 361 For Director General and Inspector General of Police

**ಕರ್ನಾಟಕ ರಾಜ್ಯ ಮುಕ್ತವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು – 570 006**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**ಸಂಖ್ಯೆ: ಕರಾಮುವಿ/ಇಂಶಾ/41/2008–09, ದಿನಾಂಕ: 28ನೇ ಫೆಬ್ರವರಿ 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧ್ಯಾದೇಶ 2000 ಪ್ರಕಾರ ಆಕ್ಟ್ 2000ದ ನಿಯಮದಂತೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂ ರೇಟ್ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿರುವವರಿಂದ ಆಹ್ವಾನಿಸಲಾಗಿದೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರನ್ನು ತೆರೆಯುವ ದಿನಾಂಕವು ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಮ್.ಡಿ.ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್., ಡಿ.ಡಿ.ಆರ್. ಕುಲಸಚಿವರು, ಕ.ರಾ.ಮು.ವಿ., ಮೈಸೂರು, ಇವರ ಹೆಸರಿಗೆ ಪಾವತಿಯಾಗುವಂತೆ ಬ್ಯಾಂಕ್ ಗ್ಯಾರಂಟಿ (ಕನಿಷ್ಠ 1 ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ, ಕುಲಸಚಿವರ ಹೆಸರಿಗೆ ಪ್ಲೆಡ್ಜ್ ಮಾಡತಕ್ಕದ್ದು.

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಮ್.ಡಿ. ಮೊತ್ತ (ರೂ. ಲಕ್ಷಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ.ಗಳಲ್ಲಿ) | ಗುತ್ತಿಗೆ ದಾರರ ದರ್ಜೆ | ಕಾಮಗಾರಿಯನ್ನು ಮುಗಿಸಲು ನಿಗದಿಪಡಿಸಿದ ಕಾಲಾವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ಕಡೆಯ ದಿನಾಂಕ ಸಂಜೆ 5.30 ರವರೆಗೆ | ಖಾಲಿ ಟೆಂಡರ್ ಫಾರಂ ಕೊಡುವ ಕಡೆಯ ದಿನಾಂಕ ಸಂಜೆ 5.30 ರವರೆಗೆ | ಭರ್ತಿ ಮಾಡಿದ ಟೆಂಡರ್ ಸ್ವೀಕರಿಸುವ ದಿನಾಂಕ ಸಂಜೆ 4.30 ರವರೆಗೆ | ಭರ್ತಿ ಮಾಡಿದ ಟೆಂಡರ್ ತೆರೆಯುವ ದಿನಾಂಕ ಬೆಳಿಗ್ಗೆ 11.00 ಗಂಟೆಗೆ |
|---|---|---|---|---|---|---|---|---|---|---|
| 1 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಆವರಣದಲ್ಲಿ ಮಹಿಳಾ ವಿದ್ಯಾರ್ಥಿ ನಿಲಯ ಕಟ್ಟಡವನ್ನು ನಿರ್ಮಿಸುವ ಕಾಮಗಾರಿ | 280.83 ಲಕ್ಷ | 2,80,838/– | 10,000/– + 12.50% | 1ನೇ ದರ್ಜೆ | 12 ತಿಂಗಳು (ಮಳೆಗಾಲವನ್ನು ಹೊರತುಪಡಿಸಿ) | 8.6.09 | 12.6.09 | 16.6.09 | 17.6.09 |

**ನಿಬಂಧನೆಗಳು:**

- ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ ನಂ. ಪಿ.ಡಬ್ಲ್ಯೂ.ಡಿ. 344 ಸಿ.ಆರ್.ಎಮ್. 2000 ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 80 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಧಿಯಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ಒಂದು ಕಾಮಗಾರಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು. ಹಾಗೂ ಕಳೆದ ಐದು ಸಾಲಿನಲ್ಲಿ ಎರಡು ವರ್ಷದಲ್ಲಿ ಈ ಕಾಮಗಾರಿಯ ಎರಡರಷ್ಟು ಮೊತ್ತದ ಆರ್ಥಿಕ ವಹಿವಾಟಿನ ವಿವರದ ಬಗ್ಗೆ ದೃಢೀಕರಣದ ಪತ್ರವನ್ನು ಸಲ್ಲಿಸಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.
- ಈ ಕಾಮಗಾರಿಗೆ ಭಾಗವಹಿಸಿರುವ ಗುತ್ತಿಗೆದಾರರು ಕೆಲಸಕ್ಕೆ ಅವಶ್ಯಕವಾದ 1–ಮೆಕಾನಿಕಲ್ ಎಸ್ಕವೇಟರ್, 1–ಟಿಪ್ಪರ್, 4–ಕಾಂಕ್ರೀಟ್ ಮಿಕ್ಸರ್, 2–ಪಿನ್ ವೈಬ್ರೇಟರ್, 2–ಫಾರಂ ವರ್ಕ್, ಸೆಂಟರಿಂಗ್ ಸಾಮಗ್ರಿಗಳು ಹಾಗೂ ಇತರ ಅವಶ್ಯಕವಾದ ಸಲಕರಣೆಗಳು ಮತ್ತು ಯಂತ್ರೋಪಕರಣಗಳ ಮಾಲಿಕತ್ವ ಹೊಂದಿರಬೇಕು. ಎಲ್ಲಾ ಯಂತ್ರೋಪಕರಣ

ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಪತ್ರಗಳೊಂದಿಗೆ ಹಾಗೂ ಆದಾಯ ತೆರಿಗೆ, ವಾಣಿಜ್ಯ ತೆರಿಗೆ ಸಂದಾಯದ ಪ್ರಮಾಣಪತ್ರಗಳನ್ನು ಲಗತ್ತಿಸತಕ್ಕದ್ದು.

- ಸದರಿ ಕಾಮಗಾರಿಯು 2 ಲಕೋಟೆಗಳನ್ನು ಹೊಂದಿದ್ದು, ಲಕೋಟೆ–ಎ: ಟೆಕ್ನಿಕಲ್ ಬಿಡ್ ಲಕೋಟೆ–ಬಿ: ಫೈನಾನ್ಸಿಯಲ್ ಬಿಡ್‌ಗಳನ್ನು ಹೊಂದಿರುತ್ತದೆ. ಟೆಂಡರುದಾರರು ಟೆಂಡರ್‌ಗಳನ್ನು 2 ಪ್ರತ್ಯೇಕ ಲಕೋಟೆಗಳಲ್ಲಿ, ಮೊಹರಾದ ಲಕೋಟೆಯ ಮೇಲೆ ಲಕೋಟೆ–ಎ: ಟೆಕ್ನಿಕಲ್ ಬಿಡ್, ಲಕೋಟೆ–ಬಿ ಫೈನಾನ್ಸಿಯಲ್ ಬಿಡ್ ಎಂದು ನಮೂದಿಸಿ ಮತ್ತೊಂದು ಲಕೋಟೆಯಲ್ಲಿ ಹಾಕಿ ಟೆಕ್ನಿಕಲ್ ಬಿಡ್, ಫೈನಾನ್ಸಿಯಲ್ ಬಿಡ್ ಎಂದು ನಮೂದಿಸಿ ಟೆಂಡರ್ ಸಲ್ಲಿಸತಕ್ಕದ್ದು.
- ಲಕೋಟೆ–ಎ: ಟೆಕ್ನಿಕಲ್ ಬಿಡ್ ಅನ್ನು ದ್ವಿ ಪ್ರತಿಗಳಲ್ಲಿ ಗುತ್ತಿಗೆದಾರರ ಬಳಿ ಇರುವ ತಾಂತ್ರಿಕ ಮಾಹಿತಿಗಳನ್ನು ಹೊಂದಿದ್ದು, ಅವುಗಳಿಗೆ ವಿವರಗಳನ್ನು ನಿಗದಿತ ರೀತಿಯಲ್ಲಿ ಸಲ್ಲಿಸಬೇಕು ಹಾಗೂ ಕಾಮಗಾರಿಗೆ ಅವಶ್ಯಕವಾದ ಇ.ಎಮ್.ಡಿ. ನಿಗದಿಪಡಿಸಿದ ಮೊತ್ತವನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಎಫ್.ಡಿ.ಆರ್. ಬ್ಯಾಂಕ್ ಗ್ಯಾರಂಟಿ (ಕನಿಷ್ಠ 1 ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ ಕುಲಸಚಿವರ ಹೆಸರಿಗೆ ಪ್ಲೆಡ್ಜ್ ಮಾಡತಕ್ಕದ್ದು.
- ಲಕೋಟೆ–ಬಿ: ಫೈನಾನ್ಸಿಯಲ್ ಬಿಡ್ ಅನ್ನು ಟೆಂಡರ್ ಷೆಡ್ಯೂಲನ್ನು ದ್ವಿಪ್ರತಿಯಲ್ಲಿ ಹೊಂದಿದ್ದು, ಪ್ರತಿ ಐಟಂಗಳಿಗೆ ದರವನ್ನು ಅಂಕೆಯಲ್ಲಿ ಮತ್ತು ಅಕ್ಷರಗಳಲ್ಲಿ ಸಲ್ಲಿಸಬೇಕು. ಲಕೋಟೆ–ಎ ಅನ್ನು ಮೊದಲು ತೆರೆಯಲಾಗುವುದು ಹಾಗೂ ಗುತ್ತಿಗೆದಾರರು ಇದರಲ್ಲಿ ಒದಗಿಸಿರುವ ವಿವರಗಳನ್ನು ಪರಿಶೀಲಿಸಲಾಗುವುದು. ತಾಂತ್ರಿಕ ಬಿಡ್ಡನ್ನು ಕುಲಸಚಿವರು ತೆರೆದು ತುಲನೆ ಮಾಡಿ ಸಕ್ಷಮ ಪ್ರಾಧಿಕಾರದವರಿಂದ ಅನುಮೋದನೆಯಾದ ನಂತರ ಲಕೋಟೆ–ಬಿ ಅನ್ನು ತೆರೆಯಲಾಗುವುದು. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.
- ಇಲಾಖೆಯಿಂದ ಯಾವುದೇ ವಸ್ತುಗಳನ್ನು ಸರಬರಾಜು ಮಾಡುವುದಿಲ್ಲ. ಕಾಮಗಾರಿಗಳಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಇತ್ಯಾದಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
- ಅರ್ಜಿದಾರರು ತಮ್ಮ ಗುತ್ತಿಗೆ ನೊಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು ಹಾಗೂ ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ತೆಗೆದುಕೊಂಡು ಹೋಗುವಂತೆ ರಿಜಿಸ್ಟ್ರೇಷನ್ ಪಾಸ್ ಬುಕ್ಕನ್ನು ಒದಗಿಸಿ ಕೆಲಸದ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು. ಟೆಂಡರ್ ಫಾರಂಗಳನ್ನು ಅಂಚೆಯ ಮೂಲಕ ಕಳುಹಿಸಲಾಗುವುದಿಲ್ಲ.
- ಗುತ್ತಿಗೆದಾರರು ಕಾಮಗಾರಿಯನ್ನು ಮುಕ್ತಾಯಗೊಳಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
- ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯದ ಬಗ್ಗೆ ಶೇ.30ರಷ್ಟು ಕಾಮಗಾರಿಯ ಮೊತ್ತಕ್ಕೆ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಸೂಕ್ತ ದೃಢೀಕರಣ ಪತ್ರವನ್ನು ಲಗತ್ತಿಸಿರಬೇಕು. (Line of Credit at 30% of amount put to tender)
- ಗುತ್ತಿಗೆ ಪೆಟ್ಟಿಗೆಗಳನ್ನು ಕಛೇರಿಯಲ್ಲಿ ಇಡಲಾಗುವುದು.
- ಹೆಚ್ಚಿನ ವಿವರಗಳು ಬೇಕಾದಲ್ಲಿ ಇಂಜಿನಿಯರಿಂಗ್ ಶಾಖೆಯ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕುಲಸಚಿವ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.

**KARNATAKA STATE OPEN UNIVERSITY, MANASAGANGOTRI, MYSORE – 570 006**

**SHORT TERM TENDER NOTIFICATION**

**No. KSOU/ES/41/2008-09, Dated: 28th February 2009**

Under Signed authority, on behalf of Governor of Karnataka, invites, sealed, super scribed, item wise tenders in duplicate, in the prescribed form, to execute the following works, from Contractors registered with Public Works Department, as per Karnataka public procurement ordinance 2000 and Act 2000. Tenders will be accepted up to 4.30 P.M on the dates given below. If the date of opening of tender is a public holiday, the same will be opened on the next working day. Undersigned authority reserves the right to reject all or any of the tenders received.

Tender forms can be obtained from the office of the undersigned during office hours on payment of tender form fee which is non refundable. EMD and Bank guarantee (minimum 1 year) is to be produced through F.D.R., D.D.R. from any nationalized bank and should be drawn in favour of Registrar, Karnataka State Open University, Mysore. If the above are produced by way of National Savings Certificate, the same should be pledged in the name of Registrar.

| Sl. No. | Name of the work | Amount of tender (Rs. in Lakhs) | EMD Amount (Rs. in Lakhs) | Cost of tender form (in Rs) | Grade of Contractor | Time for completion of work | Last date for receiving application Upto 5.30 P.M | Last date for issue of blank tender forms Upto 5.30 P.M | Last date for receiving Filled-up tender forms Upto 4.30 P.M | Date of opening of completed tender forms 11.00 A.M. |
|---|---|---|---|---|---|---|---|---|---|---|
| 1 | Construction of Womens hostel building at K.S.O.U Campus | 280.83 | 2,80,838/- | 10,000/- + 12.50% | Class-I | 12 months (excluding monsoon) | 8.6.09 | 12.6.09 | 16.6.09 | 17.6.09 |

**CONDITIONS:**

- Bidders should have the experience of efficiently completing similar type of works. As per Government order No.P.W.D. 344 C.R.M. 2000, bidders should have completed 80% equivalent of similar type of works during the previous 5 block financial years and should have completed one work during any one financial year. Bidders should submit certificate from competent authority for having satisfactorily completed financial works equivalent to 2 times of the above noted works, in 2 years, during the previous 5 block financial years.
- Contractors bidding for this work should have following construction equipments of their own, for this work: 1- Mechanical excavator, 1-Tpper, 4-concrete mixer, 2-pin vibrator, 2-form works, centering materials and also other related and necessary equipments. Possession of these equipments should be confirmed before public notary and confirmation letter from notary, income tax and commercial tax payment certificate should be enclosed with the bids.
- Tender is in 2 bid format consisting of 2 covers of (a) technical bid and (b) financial bids each. Bidders should submit their bids in 2 separate bids, superscribed as technical and financial bid in each cover and these bid covers should be inserted in another cover superscribing technical and financial bid.
- Cover A- Technical bid. Technical bid should be submitted in duplicate containing technical data with the bidder and should be submitted in the prescribed format along with EMD for the works drawn by way of FDR from any nationalized bank, Bank guarantee (minimum 1 year). If the EMD is paid through NSC, the same should be pledged in the name of Registrar.
- Cover B Financial bid. Financial bid contains tender schedule in duplicate, and for each item, rate should be quoted both in words and figures. Cover A will be opened first and information furnished by the bidders in this bid will be verified. Technical bid will be opened by the Registrar, for comparison and after acceptance by the competent authority, cover B bids will be opened. Decision of the competent authority will be final in this matter.
- Department will not supply any materials. Construction materials like, iron, cement etc., should be brought by the contractor and is to be used in the construction, after verification of the quality of the material.
- Bidders should submit their contractor's registration certificate along with application for tender forms and registration pass book details should be submitted for recording the issue details of works. Tender form will not be sent through post.
- Bidders should maintain the works completed by them, for one year, from the date of completion of the work.
- Certificate issued by a nationalized bank regarding line of credit at 30% put to tender is to be submitted along with tender document.
- Tender boxes will be made available in the office
- For more information, contact office of the Engineering Section during office hours.

P.D. 71 Registrar, Karnataka State Open University, Manasagangotri, Mysore.

**WATER RESOURCES DEPARTMENT**
**(Minor Irrigation)**
**ಸಂಖ್ಯೆ: ಸನೀಇ 03 ಮಸಾವಿ 2009, ದಿನಾಂಕ: 20ನೇ ಮೇ 2009**

**STATE TENDER BULLETIN**

The details of the notices inviting the tender in respect of the Procurement requirements of different procurement entities to be published as a part of the State - Tender Bulletin for the 4th week of May 2009. The details of the published Tender Notification may be obtained from the concerned Executive Engineers who has invited the Tender.

**V. GOVINDARAJ**
Deputy Secretary to Government
and State Tender Bulletin Officer Water Resources Department (M.I.)

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಸಣ್ಣ ನೀರಾವರಿ ವಿಭಾಗ, ಬಳ್ಳಾರಿ**
**ಅಲ್ಪಾವಧಿ ಮರು ಟೆಂಡರ್ ಆಹ್ವಾನ ಪ್ರಕಟಣೆ (ಐ.ಎಫ್.ಟಿ.ಕೆ.ಡಬ್ಲ್ಯು–4)**
**ಐ.ಎ.ಪಟಿ ನಂ:ಇಇ/ಎಂ.ಐ.ಡಿ/ಬಳ್ಳಾರಿ/ಸ.ಇಂ–1/ನಬಾರ್ಡ್ ಕಾಮಗಾರಿ/2009–10/1014, ದಿನಾಂಕ: 11ನೇ ಮೇ 2009**

1. ಕಾರ್ಯನಿರ್ವಾಹಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಕಾರ್ಯಾಲಯದಿಂದ ಅರ್ಹ ಗುತ್ತಿಗೆದಾರರಿಂದ ಈ ಕೆಳಗೆ ಕಾಣಿಸಿದ ಕಾಮಗಾರಿಯ ಟೆಂಡರ್ ಆಹ್ವಾನಿಸಲಾಗಿದೆ. ಗುತ್ತಿಗೆದಾರರು ಕಾಮಗಾರಿಗೆ ಟೆಂಡರ್ ಸಲ್ಲಿಸಬಹುದಾಗಿದ್ದು, ಕೆ.ಟಿ.ಪಿ.ಪಿ. ಆಕ್ಟ್ ನಿಯಮ–28ರ ಅನುಸಾರ ದ್ವಿಲಕೋಟೆ ಪದ್ದತಿಯನ್ನು ಅನುಸರಿಸಲಾಗುವುದು. ಗುತ್ತಿಗೆದಾರರು ಟೆಂಡರನ್ನು ಎರಡು ಪ್ರತ್ಯೇಕ ಲಕೋಟೆಯಲ್ಲಿ ಮೊಹರು ಮಾಡಿ ಸಲ್ಲಿಸಬೇಕಾಗಿದ್ದು, ಮೊದಲನೇ ಲಕೋಟೆಯಲ್ಲಿ ಮುಂಗಡ ಠೇವಣಿ ಮೊತ್ತ ಮತ್ತು ಕಾಮಗಾರಿ ಕೈಗೊಳ್ಳಲು ಸಾಮರ್ಥ್ಯ ಬಗ್ಗೆ ವಿವರ (ಐ.ಟಿ.ಟಿ.ಕ್ಲಾಜ್–3 ಮತ್ತು 6ರ ಅನುಸಾರ)ಗಳನ್ನು ಸಲ್ಲಿಸಬೇಕಾಗಿದ್ದು, ಈ ಲಕೋಟೆಯನ್ನು ಮೊದಲು ತೆರೆಯಲಾಗುವುದು. ಎರಡನೇ ಲಕೋಟೆಯಲ್ಲಿ ಟೆಂಡರ್ ದರ ವಿವರವನ್ನು ಸಲ್ಲಿಸಬೇಕಾಗಿದ್ದು, ಈ ಲಕೋಟೆಯನ್ನು ಗುತ್ತಿಗೆದಾರರು ಕಾಮಗಾರಿ ಕೈಗೊಳ್ಳಲು ಶಕ್ಯತೆಯ ಅರ್ಹತೆ ಹೊಂದಿದಲ್ಲಿ ಮಾತ್ರ ತೆರೆಯಲಾಗುವುದು. ಗುತ್ತಿಗೆದಾರರು, ಕಾಮಗಾರಿಯ ಗುತ್ತಿಗೆ ಅರ್ಹತೆ ಹೊಂದಲು ಕ್ಲಾಜ್–3ರಲ್ಲಿ ನಿರ್ದೇಶಿಸಿರುವ ಕನಿಷ್ಟ ಅರ್ಹತೆಯ ಬಗ್ಗೆ ಸಂಪೂರ್ಣ ಮಾಹಿತಿ ಮಾಡಿಕೊಳ್ಳಲು ಉಪದೇಶಿಸಲಾಗಿದೆ.
2. ಗುತ್ತಿಗೆದಾರರು ಈ ಕೆಳಗಿನ ಟೇಬಲ್‌ನಲ್ಲಿ ತಿಳಿಸಿರುವ ಟೆಂಡರ್ ಫಾರ್ಮಿನ ಬೆಲೆಯನ್ನು (ಮರಳಿ ಹಿಂತಿರುಗಿಸಲಾಗದ) ನಗದು ರೂಪದಲ್ಲಿ ಇಲ್ಲವೆ ಬಳ್ಳಾರಿಯಲ್ಲಿ ಪಾವತಿಯಾಗುವಂತೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇವರ ಹೆಸರಲ್ಲಿ ಡಿಮ್ಯಾಂಡ್ ಡ್ರಾಫ್ಟ್/ ರಾಷ್ಟ್ರೀಕೃತ/ಷೆಡ್ಯೂಲ್ಡ್ ಬ್ಯಾಂಕಿನ ಪೇ ಆರ್ಡರನ್ನು ಸಂದಾಯ ಮಾಡಿ ದಿನಾಂಕ: 15.06.2009 ರಿಂದ 18.06.2009ರವರೆಗೆ ಟೆಂಡರ್ ಡಾಕ್ಯುಮೆಂಟ್ಸ್ ಖರೀದಿಸಬಹುದು. ಆಸಕ್ತ ಗುತ್ತಿಗೆದಾರರು ಹೆಚ್ಚುವರಿ ಮಾಹಿತಿಯನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು. ಗುತ್ತಿಗೆದಾರರ ಕೋರಿಕೆಯ ಮೇರೆಗೆ ಅಂಚೆ ವೆಚ್ಚ ರೂ. 500.00 (ಪ್ರತಿ ಕೆಲಸಕ್ಕೆ) ಗಳನ್ನು ಗುತ್ತಿಗೆದಾರರಿಂದ ಭರಣಾ ಮಾಡಿಕೊಂಡು ಟೆಂಡರ್ ಡಾಕ್ಯುಮೆಂಟ್ಸ್‌ಗಳನ್ನು ನೊಂದಾಯಿತ ಅಂಚೆ / ಸ್ಪೀಡ್ ಪೋಸ್ಟ್ ಮೂಲಕ ಕಳುಹಿಸಲಾಗುವುದು. ಸದರಿ ಟೆಂಡರ್ ಡಾಕುಮೆಂಟ್ಸ್ ಅಂಚೆಯಲ್ಲಿ ವಿಳಂಬದಿಂದ ಸರಿಯಾದ ಸಮಯದಲ್ಲಿ ಗುತ್ತಿಗೆದಾರರಿಗೆ ತಲುಪದೆ ಇದ್ದಲ್ಲಿ ಇದಕ್ಕೆ ಕಾರ್ಯನಿರ್ವಾಹಕ ಇಂಜಿನೀಯರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇವರು ಹೊಣೆಗಾರರಾಗುವುದಿಲ್ಲ ಇದಕ್ಕೆ ಗುತ್ತಿಗೆದಾರರೆ ಹೊಣೆಗಾರರಾಗಿರುತ್ತಾರೆ.
3. ಟೆಂಡರ್ ದಸ್ತಾವೇಜುಗಳ ಜೊತೆಗೆ ಮುಂಗಡ ಠೇವಣಿ ಹಣವನ್ನು ಕೆಳಗಿನ ಟೇಬಲ್‌ನಲ್ಲಿ ತಿಳಿಸಿದ ಮೊತ್ತಕ್ಕೆ ಹಾಗೂ ನಿಗದಿತ ಯಾವುದೇ ರೂಪದಲ್ಲಿ ಗುತ್ತಿಗೆ ಸಲ್ಲಿಸಿದ ದಿನಾಂಕದಿಂದ ಚಲಾವಣೆಯಲ್ಲಿರುವ ಗುತ್ತಿಗೆ ಅವಧಿಗಿಂತ 45 ದಿನಗಳವರೆಗೆ ಹೆಚ್ಚಿನ ಚಲಾವಣೆಯಲ್ಲಿರುವಂತೆ ಟೆಂಡರ್‌ದೊಂದಿಗೆ ಲಗತ್ತಿಸಿ ಸಲ್ಲಿಸಬೇಕು.
4. ಟೆಂಡರ್‌ಗಳನ್ನು ಮುಖ್ಯ ಇಂಜಿನೀಯರವರ ಕಛೇರಿ ಸಣ್ಣ ನೀರಾವರಿ (ಉ)ವಲಯ, ಬಿಜಾಪುರ ಇಲ್ಲವೆ ಅಧೀಕ್ಷಕ ಇಂಜಿನೀಯರರು, ಸಣ್ಣ ನೀರಾವರಿ ವೃತ್ತ ಕಛೇರಿ ಗುಲ್ಬರ್ಗಾ ಇಲ್ಲವೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇವರ ಕಛೇರಿಯಲ್ಲಿ **ದಿನಾಂಕ: 23.06.2009 ರಂದು** ಸಾಯಂಕಾಲ 4.00 ಗಂಟೆಯ ಒಳಗಾಗಿ ಸಲ್ಲಿಸತಕ್ಕದ್ದು, ಒಂದನೇ ಲಕೋಟೆಯನ್ನು ದಿನಾಂಕ: **24.06.2009** ರಂದು ಬೆಳಿಗ್ಗೆ 11.00 ಗಂಟೆಗೆ ಉಪಸ್ಥಿತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆದು ಓದಲಾಗುವುದು. ಟೆಂಡರ್‌ಗಳನ್ನು ಸ್ವೀಕರಿಸುವ ದಿವಸವು ಸಾರ್ವತ್ರಿಕ ರಜಾ ದಿವಸ ಎಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿವಸವೆಂದು ಪರಿಗಣಿಸಲಾಗುವುದು.
5. ದಿನಾಂಕ: 20.06.2009 ರಂದು ಬೆಳಿಗ್ಗೆ 11.00 ಗಂಟೆಗೆ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಕಛೇರಿಯಲ್ಲಿ ಟೆಂಡರ್ ಕ್ಲಾಜ್–8.2 ರ ಅನುಸಾರ ಗುತ್ತಿಗೆದಾರರ ಯಾವುದೇ ಮಾಹಿತಿಗಳಿಗೆ ಸ್ಪಷ್ಟೀಕರಿಸಲು ಟೆಂಡರ್ ಪೂರ್ವ ಸಭೆಯನ್ನು ಜರುಗಿಸಲಾಗುವುದು.
6. ಇನ್ನುಳಿದ ಮಾಹಿತಿಗಳನ್ನು ಟೆಂಡರ್ ಡಾಕ್ಯುಮೆಂಟ್ಸ್‌ನಿಂದ ಪಡೆಯಬಹುದು.

ಟೇಬಲ್

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಗಳಲ್ಲಿ) | ಮುಂಗಡ ಠೇವಣಿ ಹೆಚ್ಚು / ಕಡಿಮೆ (ರೂ.ಗಳಲ್ಲಿ) | ಟೆಂಡರ್ ಡಾಕ್ಯುಮೆಂಟ್ಸ್ ಬೆಲೆ (ರೂ.ಗಳಲ್ಲಿ) | ಕಾಮಗಾರಿ ಪೂರ್ಣಗೊಳಿಸಲು ನಿಗದಿಪಡಿಸಿದ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|
| 1. | ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ವಡ್ಡರಹಳ್ಳಿ ಹತ್ತಿರ ಜೋಗಯ್ಯನಕೆರೆ ನಿರ್ಮಾಣ | 1,76,38,000/– | 2,64,600/– | 25,000/– | 15 ತಿಂಗಳು |

**ಎ.ಕೆ. ಅಣ್ಣಪ್ಪ**
ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ

**Office of the Executive Engineer, Minor Irrigation Division, Bellary**

**No:EE/MID/BLY/AE-1/Nabard Works / 2009-10/1014, Dated: 11th May 2009**

**INVITATION FOR TENDERS (IFT) [KW-4]**

**SHORT TERM RE TENDER NOTIFICATION (TWO COVER SYSTEM)**

**(As per Standard Bid Document)**

1. The Executive Engineer, M.I.Division, Bellary on behalf of the Governor of Karnataka invites tenders from eligible tenderers, for the construction of works detailed in the table below. The tenderers may submit tenders for any or all of the works given in the Table. Two cover Tender procedure as per Rule 28 of the KTPP Act shall be followed. The Tenderers are required to submit two separate sealed covers, one containing the Earnest money deposit and the details of their capability to under take the tender (as detailed in ITT clause 3 and 6), which will be opened first and the second cover containing the price tender which will be opened only if the Tenderer is found to be qualified to execute the tendered works. The Tenderers are advised to note the minimum qualification criteria specified in clause 3 of the Instruction to Tenderers to qualify for award of the contract.
2. Tender documents may be purchased from the office of Executive Engineer, M.I.Division, Bellary from 15.06.2009 to 18.06.2009 for a non-refundable fee (for two sets) as indicated in the Table below, in the form of Cash or Demand Draft/ Pay Order on any Nationalized / Scheduled Bank payable at SBM Bellary in favour of Executive Engineer, M.I.Division, Bellary Interested tenderers may obtain further information at the same address. Tender documents requested by mail will be dispatched by registered / speed post on payment of an extra amount of Rs. 500/- The Executive Engineer will not be held responsible for the postal delay if any, in the delivery of the documents or non receipt of the same.
3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.
4. Tenders must be delivered to Executive Engineer, M.I.Division, Bellary at any of the following offices 1) EE.MI Division, Bellary 2) SE, MI Circle, Gulbarga. 3) CE, MI (N) Zone, Bijapur on or before 16.00 hours on 23.06.2009 and First Cover Tenders will be opened on 24.06.2009 at 11.00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received at the above offices on the next working day and will be opened at the office of the Executive Engineer, M.I.Division, Bellary on the following working day at the same time.
5. A pre-tender meeting will be held on 20.06.2009 at 11.00 hours at the office of the Executive Engineer, M.I.Division, Bellary to clarify the issues if any, and answer question on any matter

that may be raised at that stage as stated in clause 8.2 of "Instructions to Tenderers" of the tender document.

6. Other details can be seen in the tender documents.

**TABLE**

| Package No. | Name of work | Approximate value of work (Rs) | Earnest Money Deposit (Rs) | Cost of Document (Rs) | Period of completion |
|---|---|---|---|---|---|
| 1 | Construction of Jogaiahnakere near Voddarahalli in Hospet Taluk, Bellary District. | 1,76,38,000/- | 2,64,600/- | 25,000/- | 15 months (including monsoon) |

**A.K. ANNAPPA**
Executive Engineer, M.I.Division, Bellary.

P.R. 359

**HIGH COURT OF KARNATAKA**

**NOTIFICATION**

**No. HCA-II/2/2004, Bangalore, Dated: 28th May 2009**

It is hereby notified for the information of general public that sealed tenders will be received by the undersigned for the sale of Time barred/destroyable records, outdated forms and other waste papers of this Office. The persons who are interested may therefore submit their sealed tenders **"WITHIN 20 (TWENTY) DAYS FROM THE DATE OF PUBLICATION OF THIS NOTIFICATION"** furnishing their highest rate per quintal, offered for the purchase of time barred/destroyable records etc., for consideration.

The sale of the Time barred/destroyable records & waste papers is subject to the following conditions:-

1. An Earnest Money Deposit (EMD) of Rs.10,000/- should be made in the Accounts branch-I of the High Court Office and the receipt obtained thereof should be enclosed to the quotation by the person who is interested in purchase of time barred/destroyable records and waste papers, otherwise their tender will not be considered.

2. The EMD will be refunded forthwith to those persons whose quotations are not accepted.

3. The purchaser in auction shall pay the Sales Tax as per the Sales Tax Act & Rules made thereunder.

4. The tender shall be opened by the undersigned next day before the persons who have submitted their tenders or before their authorized representative. The persons whose tenders are accepted shall make the full payment of the cost of entire lot of time barred/destroyable records, immediately after the records are put to weight and informed to him of the weight arrived at. The delivery of the records should be taken on that day, after payment.

5. In case of his failure to take delivery of the records after weighment on the same day and his failure to pay the full value thereof, the EMD shall be forfeited to the Government and he shall also be liable to make good loss, if any, incurred in case of re-tender.

6. The undersigned reserves the right to accept or reject the tenders without assigning any reasons thereof.

7. The weighment shall be made in the premises of High Court.

**M.S. BALAKRISHNA**
Registrar (Administration)

P.R. 363